ದಲಿತರ ಬಂಡಾಯದ ಕೂಗು
ಸಂಪುಟ : 3 ಅಕ್ಟೋಬರ್ 1978
ಸಂಚಿಕೆ : 2 ಬೆಲೆ : 20 ಪೈಸೆಗಳು

# ಪಂಚಮ

## ಶಿವಮೊಗ್ಗದಲ್ಲಿ ಬಸವಲಿಂಗಪ್ಪ ಸನ್ಮಾನಕ್ಕೆ ಪ್ರತಿಭಟನೆ : ದಲಿತ ಸಂಘರ್ಷ ಸಮಿತಿ ಕಪ್ಪು ಬಾವುಟ ಪ್ರದರ್ಶನ

[ಪಂಚಮ ಪ್ರತಿನಿಧಿಯಿಂದ]

ಶಿವಮೊಗ್ಗದ ಅಂಬೇಡ್ಕರ್ ಮಿಷನ್ ತಾ॥ 24-9-78 ರಂದು ಕಂದಾಯ ಮಂತ್ರಿ ಬಸವ ಲಿಂಗಪ್ಪನವರಿಗೆ ಆನೆಯಿಂದ ಮಾಲಾರ್ಪಣೆ ಮಾಡಿಸಿ ಸನ್ಮಾನ ನಡೆದ ಸಭೆಯಲ್ಲಿ ದ.ಸ.ಸ. ದ ಜಿಲ್ಲಾ ಘಟಕದ ನೂರಾರು ಮಂದಿ ಕಾರ್ಯ ಕರ್ತರು ಕಪ್ಪು ಬಾವುಟ ಪ್ರದರ್ಶಿಸಿದರು.

ಕ್ರೂರ ವ್ಯವಸ್ಥೆಯ ರಕ್ಷಣಾ ಕವಚಗಳಾಗಿರುವ ದೇವರು-ಧರ್ಮಗಳ ಕಲ್ಪನೆ ಒಡೆಯದ ಹೊರತು ಮೂಲಭೂತ ಬದಲಾವಣೆ ಸಾಧ್ಯವಿಲ್ಲ. ಇಂಥ ದೇವರ ಕಲ್ಪನೆಗೆ ಹೊಂದಿಕೊಡಂತೆ ಶೋಷಣೆಯ ಮಾಧ್ಯಮಗಳಾಗಿ ಮೇಲು-ಕೀಳು ಭಾವನೆಗಳನ್ನು ಬಿತ್ತುವ ವ್ಯಕ್ತಿ ಪೂಜೆ, ಪಾದ ಪೂಜೆ, ಅಡ್ಡ ಪಲ್ಲಕ್ಕಿ ಉತ್ಸವಗಳು ಅಸಮಾನತೆಯ ನಿದರ್ಶನಗಳು. ದೇವರ ಪಟಗಳನ್ನು ಚರಂಡಿಗೆ ಎಸೆಯಿರಿ ಎಂದು ಹೇಳಿ ದೇವರು ಧರ್ಮಗಳನ್ನು ವಿರೋಧಿಸುವ ಬಸವ ಲಿಂಗಪ್ಪನವರೇ ನಾಸ್ತಿಕವಾದಿ ಪೆರಿಯಾರ್ ದಿನಾಚರಣೆಯ ದಿನ, ಮತ್ತು ದೇಶದ ಉದ್ದಗಲಕ್ಕೂ ದಿನನಿತ್ಯ ದಲಿತರ ಕೊಲೆ ಸುಲಿಗೆ ನಡೆಯುತ್ತಿರುವ ಈ ದಿನಗಳಲ್ಲಿ ಯಾವ ಸಂತೋಷದಲ್ಲಿ ಸನ್ಮಾನ ಮಾಡಿಸಿ ಕೊಳ್ಳುತ್ತಿದ್ದೀರಿ ? ನಿಮ್ಮ ಪ್ರಗತಿ ವಿರೋಧಿ ಧೋರಣೆಗೆ ಧಿಕ್ಕಾರ. ವ್ಯಕ್ತಿ ಪೂಜೆ ಸನ್ಮಾನಗಳಿಗೆ ದಿಕ್ಕಾರ ಎಂದು ಹೇಳುವ ಕರ ಪತ್ರಗಳನ್ನು ಎರಚಿ ದ.ಸ.ಸ. ಕಾರ್ಯಕರ್ತರು ಪ್ರತಿಭಟಿಸಿದರು. ಈ ಸಂದರ್ಭದಲ್ಲಿ ಸುಮಾರು 100 ಮಂದಿ ದ.ಸ.ಸ. ಕಾರ್ಯ ಕರ್ತರನ್ನು ಬಂಧಿಸಿ ಬಿಡುಗಡೆ ಮಾಡಲಾಯಿತು.

ಇಂಡಿಯಾದ ಕ್ರೂರ ವ್ಯವಸ್ಥೆಯ ಉಳ್ಳವರ ಸ್ವಾಂತಂತ್ರ್ಯವನ್ನು ಪ್ರತಿಭಟಿಸಿ ದ.ಸ.ಸ. ಕಾರ್ಯ ಕರ್ತರು ಆಗಸ್ಟ್ 15 ರಂದು ಬೆಂಗಳೂರು, ಕೋಲಾರ, ಮೈಸೂರು, ಧಾರವಾಡ, ತುಮಕೂರು, ಚಿತ್ರದುರ್ಗ, ಮಳವಳ್ಳಿ, ಗುಲ್ಬರ್ಗ ಮುಂತಾದ ಕಡೆ ಮೆರವಣಿಗೆ ತೆಗೆದಿದ್ದರು.

## ಕೋಲಾರದಲ್ಲಿ ದಲಿತರ ಸಂಘಟಿತ ಹೋರಾಟ

[ಪಂಚಮ ಪ್ರತಿನಿಧಿಯಿಂದ]

ಕೋಲಾರದಲ್ಲಿ ಇತ್ತೀಚೆಗೆ ದಲಿತ ಸಂಘರ್ಷ ಸಮಿತಿಯ ಜಿಲ್ಲಾ ಘಟಕ ದಲಿತರ ನ್ಯಾಯವಾದ ಬೇಡಿಕೆಗಳಿಗೆ ಹೋರಾಟ ನಡೆಸಿತು.

### ಜಮೀನಿಗಾಗಿ ಬೇಡಿಕೆ

ಕೋಲಾರ ಜಿಲ್ಲೆ ಬಂಗಾರುಪೇಟೆ ತಾ. ಕರಡುಗೂರಿನ ಭೂಹೀನ ದಲಿತರು ನಿವೇಶನ ಮತ್ತು ಜಮೀನಿಗಾಗಿ ಮಜರಹಳ್ಳಿಯ ಬಳಿ ಇರುವ 116 ಎಕರೆ ಗೋಮಾಳದ ಹಂಚುವಿಕೆಗಾಗಿ ಸುಮಾರು 40 ಅರ್ಜಿಗಳನ್ನು ಸರ್ಕಾರಕ್ಕೆ ಬರೆದೂ ಬರೆದೂ ಸುಸ್ತಾದರು. ಸರ್ಕಾರದ ಈ ನಿರ್ಲಕ್ಷ್ಯದ ಹಿಂದೆ ಸ್ಥಳೀಯ ಜಮೀನ್ದಾರ ಕೆ.ಜಿ. ರಾಮರೆಡ್ಡಿಯ ಕೈವಾಡವಿದ್ದುದರಿಂದ ಏನೂ ಪ್ರಯೋಜನವಾಗಲಿಲ್ಲ.

### ಹಾಸ್ಟೆಲ್ ಕಟ್ಟಡ ಬೇಕು

ಕೋಲಾರದಲ್ಲಿ ವ್ಯಾಸಂಗ ಮಾಡುತ್ತಿರುವ 500 ದಲಿತ ವಿದ್ಯಾರ್ಥಿಗಳಿಗೆ ಸರಿಯಾದ ಹಾಸ್ಟೆಲಿನ ವ್ಯವಸ್ಥೆ ಇಲ್ಲದಿದ್ದು, ಹಾಸ್ಟೆಲಿನ ಬಿಲ್ಡಿಂಗಿಗಾಗಿ ಏಳೆಂಟು ವರ್ಷಗಳಿಂದ ಶತ ಪ್ರಯತ್ನಪಟ್ಟರೂ ರಾಜಕೀಯ ಕೈವಾಡದಿಂದ ಸರ್ಕಾರಿ ಮನಸ್ಸು ಈ ಕಡೆ ಚಲಿಸದೆ ಸುಮ್ಮನಿತ್ತು. ಇಂಥ ಸರ್ಕಾರದ ನಿರ್ಲಕ್ಷ್ಯದಿಂದ ಬೇಸರಗೊಂಡಿದ್ದ ವಿದ್ಯಾರ್ಥಿಗಳು ಮತ್ತು ಕರಡಗೂರಿನ ದಲಿತರನ್ನು ಕೋಲಾರ ದಲಿತ ಸ.ಸ. ಮತ್ತು ವಿಮುಕ್ತ ಬಳಗ ಸಂಘಟಿಸಿ ಅವರನ್ನು ತಮ್ಮ ಬೇಡಿಕೆಗಾಗಿ ಹೋರಾಡಲು ಸಜ್ಜುಗೊಳಿಸಿತು.

9 ಆಗಸ್ಟ್ 78ರಂದು ಸರ್ಕಾರದ ನಿರ್ಲಕ್ಷಕ್ಕೆ ಪ್ರತಿಭಟನೆ ಮೆರವಣಿಗೆ ತೆಗೆದು ಜಿಲ್ಲಾಧಿಕಾರಿ

[ಕೊನೆಯ ಪುಟ ನೋಡಿ]




ಆಗಸ್ಟ್ ಹದಿನೈದರಂದು ಕೋಲಾರದಲ್ಲಿ ನಡೆದ ಪ್ರತಿಭಟನೆ ಸೂಚಿಸುವ ಮೌನ ಮೆರವಣಿಗೆ

# ಎರಡನೇ ಸುತ್ತಿನ ಸಮರಕ್ಕೆ ಸಜ್ಜಾಗುತ್ತಿರುವ ವಿಲ್ಲುಪುರಂ

## ವಿಶೇಷ ವರದಿ

ಇತ್ತೀಚಿನ ದಿನಗಳಲ್ಲಿ ವಿಲ್ಲುಪುರಂ ಎಲ್ಲರ ಬಾಯಲ್ಲಿ ಕೇಳಿಬರುತ್ತಿರುವ ಹೆಸರು. ಪತ್ರಿಕೆಗಳಲ್ಲಿ ರೇಡಿಯೋಗಳಲ್ಲಿ ಎಲ್ಲಕ್ಕಿಂತ ಹೆಚ್ಚಾಗಿ ಬೂಸಾರಾಜಕಾರಣಿಗಳ ಬಾಯಲ್ಲಿ ವಿಲ್ಲುಂಪುರಂ ಮೆರೆದಾಡಿತು. ಮಾನವೀಯತೆ ಬಗ್ಗೆ ಮಾತಾಡುವವರು ಅಯ್ಯೋ ಅಂದರು. ಶೋಷಿತ ವರ್ಗಕ್ಕೆ ವೈಬೆಚ್ಚಗಾಯಿತು. ಮನಸ್ಸು ಉರಿಯಿತು.

ರಾಜಕಾರಣಿಗಳು ತಂಡತಂಡವಾಗಿ ವಿಲ್ಲುಪುರಂಗೆ ಬೇಟಿಕೊಟ್ಟರು. ಸಿನಿಮಾ ರಾಜ ಎಂ. ಜಿ. ರಾಮಚಂದ್ರನ್ ಯಾವುದೋ ಉನ್ಮಾದದ ಅಮಲಿನಲ್ಲಿ ತಲ್ಲೀನರಾಗಿದ್ದರು. ಕೇಂದ್ರ ಸರ್ಕಾರ ಘಟನೆಯನ್ನು 'ಅಭ್ಯಾಸಿಸಲು' ಸಂಸತ್ ಸದಸ್ಯರ ತಂಡವೊಂದನ್ನು ಕಳುಹಿಸುವ 'ಬೃಹತ್ ಯೋಜನೆ' ಯೊಂದನ್ನು ರೂಪಿಸಿ ಆಮೇಲೆ ಸುಮ್ಮನಾಗಿಬಿಟ್ಟಿತು. ಜನತಾಪಕ್ಷದ ಅಧ್ಯಕ್ಷ ಚಂದ್ರಶೇಖರ್ ಆದಿಯಾಗಿ ಎಲ್ಲರೂ ವಿಲ್ಲುಂಪುರಂಗೆ ಭೇಟಿ ನೀಡಿ ಹರಿಜನರ ಬಗ್ಗೆ ಅಪಾರ 'ಪ್ರೀತಿ'ಯನ್ನು ತೋರಿಸಿ ಮೊಸಳೆ ಕಣ್ಣೀರು ಹರಿಸಿದರು.

ಜುಲೈ ೨೫, ೧೯೭೮ ರ ಮಂಗಳವಾರ ತಮಿಳುನಾಡಿನ ದಕ್ಷಿಣ ಆರ್ಕಾಟ್ ಜಿಲ್ಲೆಯ ಪ್ರಮುಖ ವ್ಯಾಪಾರ ಸ್ಥಳವಾದ ವಿಲ್ಲುಂಪುರಂನಲ್ಲಿ ಶೋಷಿತರ ಮತ್ತು ಶೋಷಕರ ನಡುವೆ ನೇರ ಹೋರಾಟ ನಡೆಯಿತು. ಹೋರಾಟ ನಡೆದದ್ದು ಹರಿಜನ ಮತ್ತು ಇತರೆ ಸವರ್ಣೀಯ ಹಿಂದೂಗಳ ನಡುವೆಯಾದರೂ ಇದು ಜಾತಿ ಹೋರಾಟವಷ್ಟೇ ಆಗಿರದೆ ವರ್ಗ ಹೋರಾಟವೂ ಆಗಿತ್ತೆಂಬುದು ಇಲ್ಲಿ ಗಮನಾರ್ಹ.

### ಮೊದಲ ಹೋರಾಟವಲ್ಲ

ಶೋಷಿತ ವರ್ಗವಾದ ಹರಿಜನರ ಮತ್ತು ಈ ಪ್ರದೇಶದ ಮೇಲೆ ಎಲ್ಲಾ ಬಗೆಯ (ಆರ್ಥಿಕ-ರಾಜಕೀಯ) ಹಿಡಿತವಿಟ್ಟುಕೊಂಡಿರುವ ಭೂಮಾಲೀಕರ ಮತ್ತು ಬಂಡವಾಳಶಾಹಿ ವ್ಯಾಪಾರಿಗಳ ನಡುವೆ ಇದು ಮೊದಲನೇ ಹೋರಾಟವೇನಲ್ಲ. ಈ ಹಿಂದೆ ಹಲವುಬಾರಿ ಅಲ್ಲಲ್ಲಿ ಜಗಳಗಳು ನಡೆದಿದ್ದವು. ೧೯೬೮ರಲ್ಲಿ ಹರಿಜನ ಮತ್ತು ಮುಸ್ಲಿಮರ ನಡುವೆ ನಡೆದ ಘರ್ಷಣೆಯಲ್ಲಿ ೭ ಮಂದಿ ಹರಿಜನರನ್ನು ಕೊಲೆ ಮಾಡಲಾಗಿತ್ತು.

ಜನಸಂಖ್ಯೆಯಲ್ಲಿ ವಿಲ್ಲುಪುರಂನ ಇತರೆ ಸವರ್ಣೀಯರಿಗಿಂತ ಹೆಚ್ಚಾಗಿರುವ ಹರಿಜನರು ನಗರದ ಕೇಂದ್ರ ಪ್ರದೇಶದಲ್ಲಿ ವಾಸವಾಗಿದ್ದಾರೆ. ಜನ್ಮತಃ ಇದೇ ಊರಿನವರಾದ ಹರಿಜನರು ಕೃಷಿ ಕಾರ್ಮಿಕರಾಗಿ, ಹಮಾಲಿಗಳಾಗಿ ದುಡಿಯುತ್ತಾರೆ. ಮತ್ತೆ ಕೆಲವರು ಸೈಕಲ್ ರಿಕ್ಷಾ ತುಳಿಯುತ್ತಾರೆ. ಇವರ ಸಂಪಾದನೆ ದಿನಕ್ಕೆ ಹೆಚ್ಚೆಂದರೆ ಐದು ರೂಪಾಯಿಗಳು.

### ವಲಸೆ ಬಂದವರು

ಮುಸ್ಲಿಮರೂ ಸೇರಿದಂತೆ ಇತರೆ ಸವರ್ಣೀಯ ಹಿಂದೂ ಭೂಮಾಲೀಕರು ಮತ್ತು ವ್ಯಾಪಾರಿಗಳು ಅಕ್ಕಪಕ್ಕದ ಹಳ್ಳಿಗಳಿಂದ ಹಾಗೂ ತಿರುಚಿನಾಪಲ್ಲಿ ತಿರುನೆಲ್ವೇಲಿ ಮುಂತಾದ ಜಿಲ್ಲೆಗಳಿಂದ ಇಲ್ಲಿಗೆ ವಲಸೆ ಬಂದವರು.

ಹೀಗೆ ವಲಸೆ ಬಂದ ಇವರು ತಮ್ಮ ಎಲ್ಲಾ ಬಗೆಯ ಉತ್ಪನ್ನ ಮೂಲಗಳಿಂದ ಈ ಪ್ರದೇಶದಲ್ಲಿ ಬೇರೂರಿದರು, ವ್ಯಾಪಾರ, ಅಧಿಕಾರ, ಕೃಷಿ ಇತ್ಯಾದಿಗಳ ಮೇಲೆ ಇವರು ತಮ್ಮ ಹಿಡಿತವನ್ನು ಇಟ್ಟುಕೊಂಡರಲ್ಲದೆ ಹರಿಜನರನ್ನು ಅವರ ಅಲ್ಪ ಪ್ರಮಾಣದ ಭೂಮಿ ಮತ್ತು ವ್ಯಾಪಾರದಿಂದ ದೂರವಿಡುವುದರಲ್ಲಿ ಯಶಸ್ವಿಯಾದರು.

ಭೂಮಾಲೀಕರ ಈ ಬಗೆಯ ಹಿಡಿತ, ಶ್ರಮದ ಶೋಷಣೆ, ಕಡಿಮೆ ಕೂಲಿ ಆಗಾಗ್ಗೆ ನಡೆಯುವ ಸಣ್ಣ ಪುಟ್ಟ ಹಲ್ಲೆ ಅಕ್ರಮಗಳು ಹರಿಜನರನ್ನು ಒಂದುಗೂಡಿಸುವಲ್ಲಿ ಸಫಲವಾದವು. ಅವರು ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಸಂಘ-ಸಂಸ್ಥೆ ಇತ್ಯಾದಿಗಳನ್ನು ಮಾಡಿಕೊಳ್ಳ ತೊಡಗಿದರು.

### ಅನಿರೀಕ್ಷಿತ ಜಗಳ

ಜೂನ್ ತಿಂಗಳ ಒಂದು ದಿನ ಹರಿಜನ ಹಮಾಲಿಗಳ ಹಾಗೂ ಸ್ಥಳೀಯ ಬಸ್‌ನ ಕೆಲವರ ನಡುವೆ ಅನಿರೀಕ್ಷಿತ ಜಗಳವೊಂದು ನಡೆಯಿತು. ಇದರಿಂದ ಕುಪಿತಗೊಂಡ ಬಸ್‌ನ ಸಿಬ್ಬಂದಿವರ್ಗ ಒಂದು ದಿನದ ಮುಷ್ಕರ ನಡೆಸಿತು. ಈ ಮುಷ್ಕರವನ್ನೇ ದಾರಿ ಮಾಡಿಕೊಂಡ ಕಾರ್ಮಿಕರು ಮತ್ತು ಕೂಲಿಗಳು ತಮ್ಮ ಬೇಡಿಕೆಗಳ ಈಡೇರಿಕೆಗಾಗಿ ಹೋರಾಟವನ್ನು ಮುಂದುವರಿಸಲು ತಿರ್ಮಾನಿಸಿದರು.

ಹರಿಜನರ ಮೇಲೆ ಯಾವುದೇ ರೀತಿಯ ಹಲ್ಲೆಗೂ ತಯಾರಾಗಿದ್ದ ಸವರ್ಣೀಯರು ಈ ಸಮಯವನ್ನು ಉಪಯೋಗಿಸಿಕೊಂಡರು. ಭೂಸ್ವಾಮಿಗಳು, ವ್ಯಾಪಾರಿಗಳು ಮತ್ತು ಸ್ಥಳೀಯ ಬಸ್‌ಗಳ ಮಾಲೀಕರು ಒಂದಾಗಲು ಇದು ಅನುವು ಮಾಡಿಕೊಟ್ಟಿತು. ಇವರ ಈ ಕಾರ್ಯದಲ್ಲಿ ಪಾಲ್ಗೊಳ್ಳಲು ಎಲ್ಲಾ ರಾಜಕೀಯ ಪಕ್ಷಗಳ ಪ್ರಭಾವಶಾಲಿ ರಾಜಕಾರಣಿಗಳು ಮುಂದೆ ಬಂದರು.

### ಹರಿಜನರ ಹಲ್ಲೆ

ಇದೇ ಸಂದರ್ಭದಲ್ಲಿ ಹರಿಜನ ಮಹಿಳೆಯೊಬ್ಬಳೊಂದಿಗೆ ಅನೈತಿಕ ಸಂಬಂಧ ಇರಿಸಿಕೊಂಡಿದ್ದನೆಂಬ ಕಾರಣದ ಮೇಲೆ ಹರಿಜನರು ತರಕಾರಿ ವ್ಯಾಪಾರಿಯೊಬ್ಬನ ಮನೆಗೆ ನುಗ್ಗಿ ಅವನ ಮತ್ತು ಅವನ ಹೆಂಡತಿಯ ಮೇಲೆ ಹಲ್ಲೆ ನಡೆಸಿದರು. ಇಂಥ ಸಮಯವನ್ನೇ ಕಾಯುತ್ತಿದ್ದ ಆಸಕ್ತಹಿತಗಳು ಜುಲೈ ೨೫ ರಂದು ವಿಲ್ಲುಪುರಂ ಬಂದ್‌ಗೆ ಕರೆ ನೀಡಿದರು.

ಅವರು ಹರಿಜನರ ಮೇಲೆ ಬೀಳುವ ಸಲುವಾಗಿ ಎರಡು ಸಾವಿರ ಮಂದಿ ಗೂಂಡಾಗಳನ್ನು ಬಾಡಿಗೆಗೆ ತಂದರು, ಸುದ್ದಿ ತಿಳಿದ ಹರಿಜನರು

[4ನೇ ಪುಟನೋಡಿ]

**ಚಂದಾದಾರರಿಗೆ ಸೂಚನೆ**

"ಪಂಚಮಕ್ಕೆ" ಹಣದ ಅಗತ್ಯ ಎಷ್ಟಿದೆ ಎಂಬುದನ್ನು ನಿಮಗೆ ವಿವರಿಸಿ ಹೇಳಬೇಕಾಗಿಲ್ಲ. ಚಂದಾ ಮುಗಿದಿರುವ ಸದಸ್ಯರು ಕೂಡಲೇ ಚಂದಾ ಕಳುಹಿಸಿ ಸಹಕರಿಸಿರಿ. ಚಂದಾ ನೀಡದವರಿಗೆ ಇನ್ನು ಮುಂದೆ ಪತ್ರಿಕೆಯನ್ನು ಕಳುಹಿಸಲಾಗುವುದಿಲ್ಲವೆಂದು ಈ ಮೂಲಕ ತಿಳಿಯಪಡಿಸುತ್ತೇವೆ.

—ಪಂಚಮ ಬಳಗ

# ಮದರಾಸು ಪೋಲೀಸರಿಂದ ದಲಿತರಿಗೆ ಚಿತ್ರಹಿಂಸೆ

ಮದರಾಸು ನಗರವು ಇತ್ತೀಚಿನ ಕೆಲವು ದಿನಗಳಲ್ಲಿ ವಿಚಿತ್ರವಾದ ಪ್ರಸಿದ್ಧಿಯನ್ನು ಪಡೆಯುತ್ತಿದೆ. ಇದಕ್ಕೆ ಕಾರಣ ಇಂಡಿಯಾದ 'ಹರಿಜನ ಮುಖಂಡ'ರಾದ ಜಗಜೀವನ ರಾಂ ಮತ್ತು ಕರ್ನಾಟಕದ 'ಹರಿಜನ ಮುಖಂಡ'ರಾದ ಬಸವಲಿಂಗಪ್ಪನವರು ಅಲ್ಲಿ ಭಾರೀ ಬಹಿರಂಗ ಸಭೆಗಳನ್ನು ಉದ್ದೇಶಿಸಿ ಭಾಷಣ ಮಾಡಿದ್ದಾರೆ. ಈ ಭಾಷಣಕ್ಕಾಗಿ ಅದನ್ನು ಏರ್ಪಡಿಸಿದ್ದವರು ಉಡುಗೊರೆಗಳನ್ನು ಕೊಟ್ಟರು ಎನ್ನಲಾಗಿದೆ. ಆದರೆ ಮದರಾಸು ನಗರದ ದಲಿತರಿಗೆ ಅಲ್ಲಿನ ಪೋಲೀಸರು ಕೊಡುತ್ತಿರುವ ಭಯಂಕರವಾದ ಉಡುಗೊರೆಗಳು ನಮಗೆ ಮುಖ್ಯವಾಗಿವೆ. ಹರಿಜನೋದ್ಧಾರದ ಬಗ್ಗೆ ಭೀಕರವಾದ ಭಾಷಣಗಳು ಮತ್ತು ಹರಿಜನರ ಮೇಲೆ ದೌರ್ಜನ್ಯ ಎರಡೂ ಕೂಡ ಒಟ್ಟೊಟ್ಟಿಗೇ ನಡೆಯುತ್ತಿರುವುದು ಈ ದೇಶದ ದೊಡ್ಡ ತಮಾಷೆಯಾಗಿದೆ.

### ಸುಳ್ಳು ಆರೋಪಗಳು

ಮದರಾಸು ನಗರದ ತಿರುವಟ್ಟಿಯೂರು ಬಡಾವಣೆಯಲ್ಲಿರುವ ದಲಿತರನ್ನು ಪೋಲೀಸರು ಬಗೆಬಗೆಯ ಕಿರುಕುಳಗಳಿಗೆ ಒಳಪಡಿಸುತ್ತಿದ್ದಾರೆ. ಇವರ ಮೇಲೆ ಕಳ್ಳತನದ ಆರೋಪಗಳನ್ನು ಹೊರಿಸಿ ಇವರ ಕೇರಿಗೆ ನುಗ್ಗಿ ಕೈಗೆ ಸಿಕ್ಕಿದವರನ್ನು ಸ್ಟೇಷನ್ನಿಗೆ ಎಳೆದುಕೊಂಡು ಹೋಗಿ, ಅಮಾನುಷವಾಗಿ ಹೊಡೆಯುವುದು ಬಾಯಿಗೆ ಬಂದಂತೆ ಬೈಯ್ಯುವುದು ಇಲ್ಲಿ ನಿತ್ಯ ನಡೆಯುವ ಘಟನೆಯಾಗಿದೆ. ಯಾವ ಆಧಾರವೂ ಇಲ್ಲದೆ ಕೇವಲ ಊಹೆಯಿಂದಲೇ ಈ ರೀತಿ ಹಿಂಸೆ ಕೊಡುವುದನ್ನು ನಿಲ್ಲಿಸಬೇಕೆಂದು ದಲಿತರು ಮಾಡಿಕೊಂಡ ಮನವಿಗಳಿಗೆ ಪೋಲೀಸ್ ಅಧಿಕಾರಿಗಳು ಯಾವ ಪ್ರತಿಕ್ರಿಯೆಯನ್ನೂ ವ್ಯಕ್ತಪಡಿಸುತ್ತಿಲ್ಲ. ಇಲ್ಲಿ ವಾಸಮಾಡುವ ದಲಿತರು ಕಡುಬಡವರು. ರೈಲು ನಿಲ್ದಾಣಗಳಲ್ಲಿ ಖಾಸಗಿಯರ ಕೈಕೆಳಗೆ ದುಡಿಯುತ್ತಿರುವ ಕೂಲಿಕಾರರು.

### ಬೇಲಿಯೆ ಎದ್ದು...

ಪೋಲೀಸರ ಈ ದಬ್ಬಾಳಿಕೆಯು ಬಡವರಲ್ಲಿ ಭೀತಿಯನ್ನುಂಟುಮಾಡಿದೆ. ಇವರನ್ನು ತಡೆಯಲು ಹೋದವರ ಪ್ರಾಣಗಳು ಉಳಿಯುವಂತಿಲ್ಲ. ಪ್ರಾಣಿಗಳನ್ನು ಓಡಿಸಿಕೊಂಡು ಹೋಗುವಂತೆ ಕಂಡಕಂಡವರನ್ನು ಅಟ್ಟಿಸಿಕೊಂಡು ಬರುತ್ತಾರೆ. ಪೋಲೀಸರು ಮಾಡುತ್ತಿರುವ ಇನ್ನೊಂದು ಸಾಧನೆಯೆಂದರೆ ಕಳ್ಳತನ. ಈ ಕೇರಿಯ ದಲಿತರ ಮನೆಗಳಿಗೆ ನುಗ್ಗಿ ಗಂಡಸರು ಇಲ್ಲದ ಸಮಯದಲ್ಲಿ ಅಕ್ರಮ ಪ್ರವೇಶಮಾಡುತ್ತಾರೆ. ಗುಡಿಸಲಿನಲ್ಲಿದ್ದ ಸಣ್ಣಪುಟ್ಟ ವಸ್ತುಗಳನ್ನು ದೋಚಿಕೊಂಡು ಹೋಗುತ್ತಾರೆ, ಹೆಂಗಸರ ಒಡವೆಗಳು. ಸ್ಟೀಲ್ ತಟ್ಟೆಗಳು ಕದಿಯುವ ಪೋಲೀಸರಿಗೆ ಪ್ರಿಯವಾದ ವಸ್ತುಗಳಾಗಿವೆ.

ಕಳ್ಳತನದ ಮಾಲುಗಳನ್ನು ಶೋಧಿಸುವ ನೆಪದಲ್ಲಿ ಮನೆಗೆತೂರಿ ಹರೆಯದ ಹೆಣ್ಣುಮಕ್ಕಳ ಮೇಲೆ ಶೀಲಭಂಗದ ಯತ್ನ ಮಾಡುತ್ತಾರೆ. ಹೆಂಗಸರ ಮುಂದೆ ಗಂಡಂದಿರನ್ನು ಹುಚ್ಚರಂತೆ ಹೊಡೆಯುತ್ತಾರೆ. ಇದನ್ನು ಪ್ರತಿಭಟಿಸಿದವರನ್ನು ಗತಿಗಾಣಿಸುವುದು ಅವರಿಗೆ ಚೆನ್ನಾಗಿ ಗೊತ್ತು.

### ಕೇಸು ದಾಖಲೆಯ ನೈಖರಿ

ತಪ್ಪುಮಾಡದಿದ್ದರೂ ಹಿಡಿಯಲೇಬೇಕು ಎಂಬ ಛಲ ಪೋಲೀಸರದ್ದು. ಆದ್ದರಿಂದ ಅವರು ರಾತ್ರಿಯ ಹೊತ್ತು ಎಲ್ಲರೂ ಮಲಗಿದ್ದಾಗ ಕಳ್ಳಬಟ್ಟಿಯನ್ನು ತಂದು ದಲಿತರ ಮನೆಯ ಛಾವಣಿ ಹುಲ್ಲಿನಲ್ಲಿಡುತ್ತಾರೆ. ಸ್ವಲ್ಪ ಹೊತ್ತಿನ ನಂತರ ಏನೂ ಕಾಣದವರಂತೆ ಬಂದು ಶೋಧನೆಯ ನಾಟಕ ಮಾಡಿ ಬಂಧಿಸುತ್ತಾರೆ. ಹಣ ಕೀಳಲು ಬಳಸುವ ಈ ಬುದ್ಧಿವಂತಿಕೆಯನ್ನು ಉತ್ತಮವಾದುದಕ್ಕೆ ಬಳಸಿದ್ದರೆ ಈ ಪೋಲೀಸರನ್ನು ಎಲ್ಲರೂ ಮೆಚ್ಚಬಹುದಿತ್ತು.

[4ನೇ ಪುಟನೋಡಿ]

# ಹತ್ತೂ ಸುತ್ತಿನಿಂದ

* ತಮ್ಮ ಮೇಲೆ ಕಲ್ಲು ತೂರಾಟ ನಡೆಯುತ್ತಿದ್ದಾಗ ಹರಿಜನರು ಯಾವುದೇ ಪ್ರತೀಕಾರದ ಕ್ರಮಕ್ಕೈಗೊಳ್ಳದೆ ಗಾಂಧೀಮಾರ್ಗವನ್ನು ಅನುಸರಿಸಬೇಕಾಗಿತ್ತು.

—ಧನಿಕಲಾಲ್ ಮಂಡಲ್

[ಆಗ್ರಾ ಘಟನೆ ಕುರಿತು]

* ಇಂತಹ ಘಟನೆಗಳು ನಡೆದಾಗಲೆಲ್ಲ ಸ್ಥಳೀಯ ಸಬ್ ಇನ್ಸ್‌ಪೆಕ್ಟರ್‌ರವರನ್ನು ವರ್ಗಾವಣೆ ಮಾಡಲು ಸಾಧ್ಯವಿಲ್ಲ.

—ಡಿ. ದೇವರಾಜ ಅರಸು

[ಹರಿಜನ ಯುವತಿ ಕೊಲೆ ಪ್ರಕರಣ ಕುರಿತು]

* ದಲಿತೋದ್ಧಾರದ ಬಗ್ಗೆ ಮಾತನಾಡುವ ದೇವರಾಜ ಅರಸು ಅವರು ತಮ್ಮ ಬಳಿ ಸಮಾಜ ಕಲ್ಯಾಣ ಖಾತೆ ಇಟ್ಟುಕೊಳ್ಳದೆ ಹರಿಜನರಿಗೆ ಮಾರಕವಾಗಿರುವ ಅಬ್ಕಾರಿ ಖಾತೆಯನ್ನು ಏಕೆ ಇಟ್ಟುಕೊಂಡಿದ್ದಾರೆ.

—ಎನ್. ರಾಚಯ್ಯ

* ಕಾನೂನು ದೃಷ್ಟಿಯಲ್ಲಿ ಹರಿಜನರಾದರೇನು ಹೆಚ್ಚಲ್ಲ.

—ಬಿ. ಬಸವಲಿಂಗಪ್ಪ

[ತಮ್ಮ ಪ್ರತಿಸ್ಪರ್ಧಿಯೊಬ್ಬರ ಮನೆ ಕೆಡವಿಸಿದ ಪ್ರಕರಣ ಕುರಿತು]

* ಯಾವಾಗಲೂ ನನಗೆ ಹರಿಜನರ ಬಗ್ಗೆಯೇ ಪ್ರಶ್ನಿಸುತ್ತೀರಲ್ಲ ಏಕೆ.

—ಜಗಜೀವನರಾಂ

* ಲೋಕಸಭೆ, ವಿಧಾನಸಭೆ ಚುನಾವಣೆಗಳಲ್ಲಿ ಮೀಸಲು ಸ್ಥಾನಗಳನ್ನು ರದ್ದುಗೊಳಿಸಬೇಕು.

—ಎನ್. ರಾಚಯ್ಯ

* ಪರಿಶಿಷ್ಟವರ್ಗದ ಪಟ್ಟಿಗೆ ಸೇರಿಸಿರುವ ಅಸ್ಪೃಶ್ಯರಲ್ಲದವರನ್ನು ತೆಗೆದು ಹಾಕಬೇಕು.

—ಎನ್. ರಾಚಯ್ಯ

* ಪರಿಶಿಷ್ಟವರ್ಗದ ಪಟ್ಟಿಗೆ ಕೇವಲ ಹಿಂದೂಗಳನ್ನು ಮಾತ್ರ ಸೇರಿಸುತ್ತಿರುವುದು. ಆದ್ದರಿಂದ ಹರಿಜನರು ಸಮಾಧಾನದಿಂದರಬೇಕು.

—ಎಲ್.ಜಿ. ಹಾವನೂರು

* ಗಾಂಧಿ ಹುಟ್ಟಿದ ಈ ನಾಡಿನಲ್ಲಿ ಹರಿಜನ ಹೆಂಗಸೊಬ್ಬಳು ನೀರು ಮುಟ್ಟಿದಳೆಂಬ ಕಾರಣಕ್ಕಾಗಿ ಸವರ್ಣೀಯ ಪಂಚಾಯಿತಿದಾರರು ಚಾವಡಿಯಲ್ಲಿ ಆಕೆಯನ್ನು ಅಮಾನುಷವಾಗಿ ಥಳಿಸುವಂಥದನ್ನು ನಾವು ಈಗ ಊಹಿಸಿಕೊಳ್ಳಲೂ ಸಾಧ್ಯವಿಲ್ಲ.

—ಖಾದ್ರಿ ಶಾಮಣ್ಣ

[ಒಂದು ಊರಿನಕತೆ ಚಲನಚಿತ್ರದಲ್ಲಿರುವ ಒಂದು ಸನ್ನಿವೇಶದ ಬಗ್ಗೆ.]

# ದಲಿತ ನುಡಿ

ನಿಮ್ಮ ಜೀವನದ ಒಳಿತು-ಕೆಡುಕುಗಳು ನೀವು ಹುಟ್ಟುವ ಮುನ್ನವೇ ನಿರ್ಧಾರಿತವಾಗಿಬಿಟ್ಟಿವೆ ಎಂಬ ಮೂಢನಂಬಿಕೆಯನ್ನು ಕಿತ್ತೊಗೆಯಿರಿ. ನಿಮ್ಮ ಸುಖ-ದುಃಖ, ದಾರಿದ್ರ್ಯಗಳಿಗೆ ದೇವರು ಕಾರಣ ಅಲ್ಲವೇ ಅಲ್ಲ. ಅವುಗಳಿಂದ ಬಿಡುಗಡೆ ಇಲ್ಲ ಎಂಬ ನಿರಾಶೆ ಮಾತ್ರ ಬೇಡ. ಈ ತೆರನಾದ ಅನಂತ ಮೂಢನಂಬಿಕೆಗಳೇ ನೀವು ಶಾಶ್ವತ ಗುಲಾಮರಾಗಿರಲು ಕಾರಣ.

—ಡಾ|| ಬಿ. ಆರ್. ಅಂಬೇಡ್ಕರ್

## ಎರಡನೇ ಸುತ್ತಿನ ಸಮರಕ್ಕೆ ಸಜ್ಜಾಗುತ್ತಿರುವ ವಿಲ್ಲುಪುರಂ

[2ನೇ ಪುಟದಿಂದ]

ಹೆದರಿ ಸ್ಥಳೀಯ ಅಧಿಕಾರಿಗಳ ಸಹಾಯದಿಂದ ಈ ಬಗೆಗೆ ತೀರ್ಮಾನವೊಂದಕ್ಕೆ ಬರಲು ಬಯಸಿದರು. ಮಾತುಕತೆಯಾಗುತ್ತಿರುವಾಗ ಬಾಡಿಗೆಗೆ ತಂದಿದ್ದ ಗೂಂಡಾಗಳಿಂದ ಜಗಳ ಆರಂಭವಾಯಿತು. ಹರಿಜನರ ಮತ್ತು ಗೂಂಡಾಗಳ ಎರಡು ಗುಂಪಿನ ನಡುವೆ ಜಗಳ ತೀವ್ರವಾಗಿ ಬೆಳೆಯಿತು.

**ಮನೆಗೆ ಬೆಂಕಿ**

ಕೋಪಗೊಂಡ ವ್ಯಾಪಾರಿಯೊಬ್ಬ ತನ್ನ ಪೆಟ್ರೋಲ್ ಬಂಕ್‌ನಿಂದ ಪೆಟ್ರೋಲ್ ತರುವಂತೆ ಗೂಂಡಾಗಳಿಗೆ ಹೇಳಿಕಳುಹಿಸಿದ. ಪೆಟ್ರೋಲ್ ತಂದ ಗೂಂಡಾಗಳು ಹರಿಜನರ ಮನೆಗಳಿಗೆ ಎರಚಿ ಬೆಂಕಿ ಹಚ್ಚಿದರು. ಬೇಯುತ್ತಿರುವ ಮನೆಯೊಳಗೆ ಇರಬಹುದಾದ ತಮ್ಮವರನ್ನು ರಕ್ಷಿಸಲು ಹೊರಟ ಹರಿಜನರ ಮೇಲೆ ಗೂಂಡಾಗಳು ಹಲ್ಲೆ ನಡೆಸಿದರು. ಹದಿಮೂರು ಮಂದಿಯನ್ನು ಅಮಾನುಷವಾಗಿ ಕೊಂದರು.

ಹರಿಜನ ಕೇರಿಯನ್ನು ಆವರಿಸಿದ್ದ ಗೂಂಡಾಗಳು ಬೆಂಕಿ ಆರಿಸಲು ಬಂದ ಅಗ್ನಿಶಾಮಕ ದಳದವರನ್ನು ತಡೆದರು. ಆ ಪ್ರದೇಶಕ್ಕೆ ಯಾವುದೇ ವಾಹನ ಬರದಂತೆ ತಡೆಗಟ್ಟಿದರು. ಸರಕಾರಿ ಬಸ್ ಮತ್ತು ರೈಲುಗಳನ್ನೂ ನಿಲ್ಲಿಸಿದರು. ಭೂಮಾಲೀಕರು ಮತ್ತು ವ್ಯಾಪಾರಿಗಳಿಂದ ತಯಾರಾದ ಈ ಗೂಂಡಾಗಳು ಸೈಕಲ್ ಚೈನು ಮತ್ತು ಚೂರಿಗಳನ್ನು ಹಿಡಿದು ವಿಲ್ಲುಪುರಂ ಅನ್ನು ಕಾದರು !

**ತಿರುಗಿಬಿದ್ದ ಹರಿಜನರು**

ಬಾಡಿಗೆ ಗೂಂಡಾಗಳ ಈ ಅಮಾನುಷ ಕೃತ್ಯದಿಂದ ಹೆದರಿದ ಹರಿಜನರು ಕದ್ದು ಕಾಣದಂತೆ ಅಕ್ಕಪಕ್ಕದ ಹಳ್ಳಿಗಳಿಗೆ ಹೋಗಿ ಅಲ್ಲಿ ತಮ್ಮ ಕಡೆಯವರನ್ನೆಲ್ಲ ಸೇರಿಸಿಕೊಂಡು ಜುಲೈ ೨೬ರಂದು ಸವರ್ಣೀಯ ಹಿಂದು ಮತ್ತು ಮುಸ್ಲಿಮರ ಮನೆಗಳನ್ನು ಸುಡಲು ಆಕ್ರಮಿಸಿದರು. ಎರಡು ಗುಂಪಿನ ನಡುವೆ ನಡೆದ ಕಾಳಗದಲ್ಲಿ ಒಟ್ಟು ಸತ್ತವರ ಸಂಖ್ಯೆ ೨೦ಕ್ಕೂ ಹೆಚ್ಚು.

ಭಸ್ಮವಾದ ೨೯೯ ಮನೆಗಳಲ್ಲಿ ೧೦೫ ಹರಿಜನರಿಗೆ ಸೇರಿದುವು. ಇದರೊಂದಿಗೆ ಹರಿಜನರಿಗೆ ಸೇರಿದ ಒಂದು ನೂರು ಸೈಕಲ್ ರಿಕ್ಷಾಗಳು ಬೆಂಕಿಗೆ ಆಹುತಿಯಾದವು. ಸುಮಾರು ೩೦೦ ಹರಿಜನ ಕುಟುಂಬಗಳು ನಿರ್ವಸಿತವಾದವು. ಈ ಎಲ್ಲಾ ಹಿಂಸಾಕೃತ್ಯಗಳು ಮುಗಿದು ವಿಲ್ಲುಂಪುರಂ ತಣ್ಣಗಿರುವಾಗ ಜುಲೈ ೨೮ರಂದು ಸರಕಾರ ರಕ್ಷಣೆಗಾಗಿ ಪೋಲೀಸರನ್ನು ಕಳುಹಿಸಿಕೊಟ್ಟಿತು.

ವಿಲ್ಲುಪುರಂನಲ್ಲಿ ನಡೆದ ಈ ಘಟನೆ ಅಕ್ಕಪಕ್ಕದ ಹಳ್ಳಿಗಳ ಮೇಲೂ ತನ್ನ ಪ್ರಭಾವವನ್ನು ಬೀರಿತು. ಒರುಕೋಡಿ ಎಂಬ ಗ್ರಾಮದಲ್ಲಿ ಹರಿಜನರಿಗೆ ಸೇರಿದ ಸುಮಾರು ೩೦ ಮನೆಗಳನ್ನು ಭೂಮಾಲೀಕರು ಸುಟ್ಟುಹಾಕಿದರು.

**ಎರಡನೇ ಸುತ್ತು ಅನಿವಾರ್ಯ**

"ಹರಿಜನರು ಒಂದು ಲೋಟ ಕಾಫಿಗಾಗಿ ಕೂಡ ಟೌನಿನಲ್ಲಿ ತಲೆ ಎತ್ತಿ ತಿರುಗುವಂತಿಲ್ಲ. ಅವರನ್ನು ಅತಿ ಹೇಯವಾಗಿ ನಡೆಸಿ ಕೊಳ್ಳಲಾಗುತ್ತಿದೆ" ಎಂದು ಯು.ಎನ್.ಐ. ವಾರ್ತಾ ಸಂಸ್ಥೆ ವರದಿ ಮಾಡಿದೆ. ಹೊಟ್ಟೆಗೆ ತುತ್ತು ಕೂಳಿಲ್ಲದೆ ಬಟ್ಟೆ ಇಲ್ಲದೆ ಬೆತ್ತಲೆ ಅರೆಬೆತ್ತಲೆಯಾಗಿರುವ ಹೆಂಗಸರು ಮಕ್ಕಳು ಅಳುವ ಚೀರಿಡುವ ದೃಶ್ಯ ಹೃದಯ ಹಿಂಡುವಂತಿತ್ತು ಎಂದೂ ಅದು ವರದಿ ಮಾಡಿದೆ.

ಈ ಘಟನೆ ನಡೆದು ತಿಂಗಳುಗಳು ಉರುಳಿದ ನಂತರವೂ ಅಲ್ಲಲ್ಲಿ ಸಣ್ಣ ಪುಟ್ಟ ಗಲಭೆಗಳು ಆಗುತ್ತಲೇ ಇವೆ. ಮೊದಲಿಗಿಂತ ಈಗ ಹರಿಜನರು ಹೆಚ್ಚು ಸಂಘಟಿತರಾಗುತ್ತಿದ್ದಾರೆ. "ನ್ಯಾಯಕ್ಕಾಗಿ ಆರಂಭವಾದ ಹೋರಾಟದ ಮೊದಲನೇ ಮಜಲಷ್ಟೆ ಮುಗಿದಿದೆ. ಯುದ್ಧದ ಎರಡನೇ ಸುತ್ತು ಅನಿವಾರ್ಯ" ಎಂಬುದು ಅಲ್ಲಿನ ಹರಿಜನರ ದಿಟ್ಟನುಡಿ.

**—ಇಂದೂಧರ ಹೊನ್ನಾಪುರ**

('ಪ್ರಜಾವಾಣಿ' ಕೃಪೆ)

## ಮದರಾಸು ಪೋಲೀಸರಿಂದ ದಲಿತರಿಗೆ ಚಿತ್ರಹಿಂಸೆ

[3ನೇ ಪುಟದಿಂದ]

**ನಿದ್ದೆಯಿಲ್ಲದ ದಲಿತರು**

ಈ ದೇಶದಲ್ಲಿ ದಲಿತರಿಗೆ ಆಹಾರವಿಲ್ಲ, ಬಟ್ಟೆಯಿಲ್ಲ, ಮರ್ಯಾದೆಯಿಲ್ಲ ಎಂಬುದು ಎಲ್ಲರಿಗೂ ತಿಳಿದ ವಿಷಯ. ಆದರೆ ಮದರಾಸಿನ ಈ ದಲಿತರಿಗೆ ನಿದ್ದೆಯೂ ಇಲ್ಲ. ಮಧ್ಯರಾತ್ರಿಯಲ್ಲಿ ಪೋಲೀಸರು ಬಂದು ಮಲಗಿದ್ದವರನ್ನು ಪೋಲೀಸು ಠಾಣೆಗೆ ಎಳೆದುಕೊಂಡು ಹೋಗುತ್ತಾರೆ. ತಾವು ಕರೆದುಕೊಂಡು ಹೋಗುವ ಮಾರವಾಡಿಗಳ ಮುಂದೆ ಏನು ಹೇಳಬೇಕು ಎನ್ನುವುದನ್ನು ಬಾಯಿಪಾಠ ಮಾಡಿಸಿ ತಾವು ಕದಿಯದಿದ್ದರೂ, ಗಿರವಿ ಇಡದಿದ್ದರೂ ಬಲಾತ್ಕಾರವಾಗಿ ಇವರ ಬಾಯಿಂದ ಹಾಗೆ ಹೇಳಿಸಿ ಮಾರವಾಡಿಗಳಿಂದ ವಡವೆಗಳನ್ನೂ, ವಸ್ತುಗಳನ್ನೂ ಸಂಗ್ರಹಿಸಿ, ಬೆಳಿಗ್ಗೆ ಆಗುವ ವೇಳೆಗೆ ಹುಡುಗರನ್ನು ಬಿಟ್ಟು ಬಿಡುತ್ತಾರೆ. ದಲಿತ ಹುಡುಗರನ್ನು ಪೋಲೀಸರು ಬಳಸಿಕೊಳ್ಳುವ ರೀತಿ ಇದು.

**ಸರ್ಕಾರದ ನೆರವಿನ ನಾಟಕ**

ಇಲ್ಲಿರುವ ದಲಿತರು ಆಂಧ್ರಮೂಲದವರು. ಇವರ ಪುನರ್ ವಸತಿಗಾಗಿ ಸರ್ಕಾರಿ ಲೆಕ್ಕದಲ್ಲಿ ಸಾಕಷ್ಟು ಹಣವನ್ನು ಖರ್ಚುಮಾಡಲಾಗಿದೆ. ಖಾಸಗೀ ಕಂಟ್ರಾಕ್ಟರುಗಳಿಂದ ಇವರಿಗಾಗಿ ಕಟ್ಟಿಸಿಕೊಟ್ಟಿರುವ ಮನೆಗಳು ಮಳೆ ಬಂದಾಗ ಬಿದ್ದುಹೋಗಿವೆ. ಇವರಿಗೆ ಕೊಟ್ಟ ಎಮ್ಮೆ, ಹಸುಗಳು ಸೂಕ್ತ ಆಹಾರವಿಲ್ಲದೆ ಸತ್ತುಹೋಗಿವೆ. ಆದರೆ ಇದಕ್ಕಿಂತ ಹೆಚ್ಚುಪಾಲು ಹಣವನ್ನು ಸಮಾಜ ಕಲ್ಯಾಣ ಇಲಾಖೆಯ ಅಧಿಕಾರಿಗಳು ಸ್ವಾಹ ಮಾಡಿದ್ದಾರೆ.

**ದಲಿತರೂ ಮನುಷ್ಯರು**

ಪೋಲೀಸರಿಂದ, ಸಮಾಜ ಕಲ್ಯಾಣ ಅಧಿಕಾರಿಗಳಿಂದ ವಂಚನೆಗೊಳಗಾಗಿರುವ ಈ ಜನ ಪ್ರಾಣಿಗಳಂತೆ ಬದುಕುತ್ತಿದ್ದಾರೆ. ತಮಗೆ ನ್ಯಾಯ ಬೇಕೆಂದು ಕೊಟ್ಟ ಮನವಿಗಳು ಬುಟ್ಟಿ ಸೇರಿವೆ. ಈ ಪ್ರದೇಶದ ವಿದ್ಯಾವಂತ ದಲಿತರು ಮಾನವ ಹಕ್ಕುಗಳಿಗೆ ಹೋರಾಡಲು ಒಂದು ಸಂಘ ಕಟ್ಟಿದ್ದಾರೆ. ಪೋಲೀಸರ ಕಿರುಕುಳ ತಪ್ಪಿಸಬೇಕೆಂದು ರಾಷ್ಟ್ರಪತಿಯವರೆಗೂ ಅರ್ಜಿ ಕೊಡಲಾಗಿದೆ. ಇಷ್ಟಾದರೂ ಈ ಬಂಡವಾಳಶಾಹಿ ಸಮಾಜಕ್ಕೆ ದಲಿತರೂ ಮನುಷ್ಯರು ಎಂಬ ವಿಷಯ ಗೊತ್ತಾಗಿಲ್ಲ.

**—ಎಸ್. ಎಲ್.**

# ಮರಾಠವಾಡ ವಿಶ್ವವಿದ್ಯಾಲಯಕ್ಕೆ ಅಂಬೇಡ್ಕರ್ ಹೆಸರಿಡಲು ವಿರೋಧ: ದಲಿತರಮೇಲೆ ಸವರ್ಣೀಯರ ವಿನಾಶಕಾರಿ ಕೃತ್ಯಗಳು

ಈ ದೇಶದ ಬಹುಸಂಖ್ಯಾತ ದಲಿತರ ನಾಯಕರಾಗಿದ್ದ ಡಾ॥ ಬಿ. ಆರ್. ಅಂಬೇಡ್ಕರ್‌ರವರ ಹೆಸರನ್ನು ಮರಾಠವಾಡ ವಿಶ್ವವಿದ್ಯಾನಿಲಯಕ್ಕೆ ಇಡಬೇಕೆಂದು ಮಹಾರಾಷ್ಟ್ರ ಸರ್ಕಾರದ ಶೀರ್ಮಾನದ ವಿರುದ್ಧ ಚಳುವಳಿ ನಡೆಸಿದವರ [ಜುಲೈ 28ರಿಂದ, ಆಗಸ್ಟ್ 8 ರವರೆಗೆ] ಕ್ರೂರ ಹಿಂಸಾತ್ಮಕ ಹತ್ಯಾಕಾಂಡದಲ್ಲಿ 19 ಹರಿಜನರು ಕೊಲೆಯಾದರಲ್ಲದೆ ನೂರಾರು ಮಂದಿ ಗಾಯಗೊಂಡರು. ಅನೇಕ ಮುಗ್ಧ ಹೆಂಗಳೆಯರು ಮಾನಭಂಗಕ್ಕೀಡಾದರು. ಹರಿಜನರ ಒಟ್ಟು 1,200 ಗುಡಿಸಲುಗಳು ಭಸ್ಮವಾದವು.

ಇದು ನಡೆದದ್ದು ದಲಿತರ ಅಸಂಘಟಿತ ರಾಜ್ಯದಲ್ಲಲ್ಲ, ಮೊಟ್ಟಮೊದಲಿಗೆ ದಲಿತರ ಏಳಿಗೆಗೆ ಸೊಲ್ಲೆತ್ತಿದ ಪುಣೆಯ ಜ್ಯೋತಿ ಬಾಪುಳೆ ಮತ್ತು ಅಂಬೇಡ್ಕರ್‌ರವರು ಹುಟ್ಟಿದ ನೆಲೆಯಲ್ಲಿ. ಅಂಬೇಡ್ಕರ್ ತತ್ವ, ಹೋರಾಟದ ಪ್ರೇರಣೆ ಶಕ್ತಿಯಿಂದ ಹುಟ್ಟಿಕೊಂಡ ದಲಿತ ಪ್ಯಾಂಥರ್ಸ್ ಕ್ರಾಂತಿಕಾರಿ ಸಂಘಟನೆಯ ಪ್ರಾಬಲ್ಯವನ್ನು ಮೊಟಕುಗೊಳಿಸುವುದೆ ಚಳುವಳಿಯ ಬಹುಪಾಲು ಉದ್ದೇಶವಾಗಿತ್ತು. ಚಳುವಳಿಯ ದಮನ ಕೃತ್ಯಗಳಿಗೆ ಅಲ್ಲಿನ ಅಂದಿನ ಕೆಟ್ಟ ರಾಜಕೀಯ ಕೈವಾಡ ಗಣನೀಯವಾದರೂ, ಪ್ಯಾಂಥರ್ಸ್ ಪ್ರಾಬಲ್ಯ ಮತ್ತು ಅಂಬೇಡ್ಕರ್‌ರವರ ಹೆಸರೇ ಪ್ರಮುಖವಾಗಿತ್ತೆಂದು, ಭಯಾನಕ ಚಳುವಳಿಯ ಮುಖಂಡತ್ವವಹಿಸಿದ್ದ ವಿದ್ಯಾರ್ಥಿ ಕ್ರಿಯಾ ಸಮಿತಿಯ ಕೆಲವು ಸದಸ್ಯರು 'ಮರಾಠವಾಡ ಧೈನಿಕವೊಂದಕ್ಕೆ ನೀಡಿದ ಸಂದರ್ಶನದಲ್ಲಿ ತಿಳಿದುಕೊಳ್ಳಬಹುದು.

### ಮೂರು ಕಾರಣ

ತಮ್ಮ ಚಳುವಳಿಗೆ ಅವರು ನೀಡಿದ ಮೂರು ಮುಖ್ಯ ಕಾರಣಗಳಿವು. (1) ಅಂಬೇಡ್ಕರ್ ಹುಟ್ಟಿದ್ದು ರತ್ನಗಿರಿ ಜಿಲ್ಲೆ. ಅವರು ತಮ್ಮ ಜೀವನದ ಬಹುಭಾಗವನ್ನು ಮುಂಬೈ ಪ್ರದೇಶದಲ್ಲೇ ಕಳೆದವರು. ಆದ್ದರಿಂದ ಅಲ್ಲಿನ ವಿಶ್ವವಿದ್ಯಾನಿಲಯಕ್ಕೆ ಅವರ ಹೆಸರನ್ನಿಡಬೇಕಿತ್ತು. ಅವರು ತಮ್ಮ ಜೀವನದ ಕೊನೆಗಾಲದಲ್ಲಿ ಔರಂಗಾಬಾದ್‌ನಲ್ಲಿ ಅನೇಕ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿರಬಹುದು. ಆದರೆ ಅವರ ಆ ಸೇವೆಗೆ ಗೌರವತೋರಿಸಲು ವಿಶ್ವವಿದ್ಯಾನಿಲಯಕ್ಕೆ ಹೆಸರು ಇಡುವುದೊಂದೇ ದಾರಿಯಲ್ಲ.

(2) ಮರಾಠವಾಡ ವಿಶ್ವವಿದ್ಯಾನಿಲಯ ಈಗಾಗಲೇ ಹೊರಗಿನವರಿಂದ ಮತ್ತು ವಿಶೇಷವಾಗಿ ಅಂದರೆ ಶೇ. 25ರಷ್ಟು ಮಹರ್ ವಿದ್ಯಾರ್ಥಿಗಳಿಂದಲೇ ತುಂಬಿಹೋಗಿದೆ.

(3) ಮಹರ್ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಿರುವುದರಿಂದ ಈ ಪ್ರದೇಶದಲ್ಲಿ ದಲಿತ ಪ್ಯಾಂಥರ್ಸ್ ತಮ್ಮ ಪ್ರಾಬಲ್ಯ ಹೆಚ್ಚಿಸಿಕೊಂಡಿದ್ದಾರೆ. ಇದು ಸಹಿಸಲಸಾಧ್ಯ–

ಜುಲೈ 27 ರಂದು ಡಾ॥ ಅಂಬೇಡ್ಕರ್ ಮರಾಠವಾಡ ವಿಶ್ವವಿದ್ಯಾನಿಲಯವೆಂದು ಹೆಸರಿಡುವ ನಿರ್ಣಯವನ್ನು ಶಾಸನಾಂಗ ಅಂಗೀಕರಿಸಿದ ಸುದ್ದಿ ಹಬ್ಬುತ್ತಿದ್ದಂತೆ ಸಂಜೆ 7ಗಂಟೆ ಹೊತ್ತಿಗೆ ವಿದ್ಯಾರ್ಥಿಗಳ ಗುಂಪೊಂದು ಚಳುವಳಿಗೆ ಬೀದಿಗೆ ಇಳಿಯಿತು.

### ವಿ. ವಿ. ನಿರ್ಧಾರ

ಸರ್ಕಾರದ ಈ ನಿರ್ಧಾರ ಹೊಸದೇನೂ ಅಲ್ಲ. ಎರಡು ದಶಕಗಳ ಹಿಂದೆ ಅದೇ ವಿಶ್ವವಿದ್ಯಾಲಯದಲ್ಲಿ ಹರಜನರೊಬ್ಬರು ಅಸಿಸ್ಟೆಂಟ್ ರಿಜಿಸ್ಟ್ರಾರ್ ಆಗಿದ್ದಾಗಲೇ ಅವರು ವಿಶ್ವವಿದ್ಯಾಲಯಕ್ಕೆ ಡಾ॥ ಅಂಬೇಡ್ಕರ್‌ರವರ ಹೆಸರಿಡಬೇಕೆಂಬ ಶಿಫಾರಸ್ಸು ಮಾಡಲಾಗಿತ್ತು. ಚಳುವಳಿ ದಿನೇ ದಿನೇ ತಿವ್ರವಾಗುತಿದ್ದುದ್ದನ್ನು ಗಮನಿಸಿದ ಮರಾಠವಾಡ ವಿಶ್ವವಿದ್ಯಾನಿಲಯದ ಮಾಜಿ ರಿಜಿಸ್ಟ್ರಾರ್ ಎಂ.ಬಿ. ಚಟ್ನಿಸ್ ಅವರು ಪುನರ್ ನಾಮಕರಣದ ಬಗ್ಗೆ ಸ್ಪಷ್ಟನೆ ನೀಡಿದರು. ವಿಶ್ವವಿದ್ಯಾನಿಲಯ ಸ್ಥಾಪನೆಯಲ್ಲಿ ಅಂಬೇಡ್ಕರ್ ನಿಕಟ ಸಂಪರ್ಕ ಹೊಂದಿದ್ದು ಈ ಪ್ರದೇಶದ ಶಿಕ್ಷಣಾಭಿವೃದ್ಧಿಗೆ ಶ್ರಮಿಸಿದ್ದರು. ಆದ್ದರಿಂದ ಕಳೆದ ವರ್ಷದ ಅಕ್ಟೋಬರ್‌ನಲ್ಲಿ ವಿಶ್ವವಿದ್ಯಾನಿಲಯದ ಸೆನೆಟ್ ಅಂಬೇಡ್ಕರ್‌ರವರ ಹೆಸರಿಡಲು ನಿರ್ಣಯಮಾಡಿತು. ಎಕ್ಸಿಕ್ಯೂಟಿವ್ ಕೌನ್ಸಿಲ್ ಅದನ್ನು ಅವಿರೋಧವಾಗಿ ಅಂಗೀಕರಿಸಿತ್ತೆಂದು ಪತ್ರಿಕಾ ಹೇಳಿಕೆ ನೀಡಿದರು,

1974ರಲ್ಲಿ 'ಮರಾಠವಾಡ ರಕ್ಷಿಸಿ' ಚಳುವಳಿಗಳ ಮುಂಚೂಣಿಯಲ್ಲಿದ್ದ ಬಹುತೇಕ ವಿದ್ಯಾರ್ಥಿಗಳು ಮತ್ತು ಯುವಕರೇ ಈಗ ಅಲ್ಲಿನ ದಲಿತರನ್ನು ನಿರ್ನಾಮಗೊಳಿಸಲು ಮುಂದಿದ್ದರು.

### ವ್ಯಾಪಕ ಚಳುವಳಿ

ಜುಲೈ 28ರಂದು ಆರಂಭವಾದ ಚಳುವಳಿಯು ಔರಂಗಾಬಾದ್, ಜಲನ, ಅಂಬಾದ್, ಸೈಲು ಪರಭಾನಿ, ಜಂಟೂರ್, ಲಾಟೂರ್ ಮತ್ತು ಇತರ ಕಡೆಗಳಲ್ಲಿ ವ್ಯಾಪಕವಾಗಿ ಹಬ್ಬಿ ದಲಿತರ ಮೇಲಿನ ಹಲ್ಲೆ, ದೌರ್ಜನ್ಯದತ್ತ ತಿರುಗಿತು. ದಲಿತರ ಗುಡಿಸಲುಗಳಿಗೆ ಬೆಂಕಿ, ಮಹಿಳೆಯರ ಮೇಲೆ ಅತ್ಯಾಚಾರ ಮುಂತಾದ ಹೀನ ಕೃತ್ಯಗಳಿಗೆ ಚಳುವಳಿಯಲ್ಲಿದ್ದ ಜಾತ್ಯಾಂಧರು ತೊಡಗಿದರು. ಮರುದಿನ ಒಸ್ಮಾನಾಬಾದ್ ಜಿಲ್ಲೆ ಪರ್ಲಿ, ಬಿರ್ ಪ್ರದೇಶಗಳಿಗೂ ದಲಿತರ ಮೇಲಿನ ದಬ್ಬಾಳಿಕೆ ಬಿಸಿ ಮುಟ್ಟಿಸಿತು. ಆಗಸ್ಟ್ 2ರಂದು ನಂದೇಡ್, ಪರಭಾನಿ ಜಿಲ್ಲೆಗಳಲ್ಲಿ ಮಹರ್ ಜನರ ಮನೆಗಳಿಗೆ ಬೆಂಕಿ ಹಚ್ಚಲಾಯಿತು.

ಚಳುವಳಿಯನ್ನು ಹತ್ತಿಕ್ಕಿ ತಮ್ಮ ಜನರ ರಕ್ಷಣೆಗೆ ನಿಂತ ದಲಿತ ಪ್ಯಾಂಥರ್ಸ್ ನಾಯಕರು ಅಲ್ಲಲ್ಲಿ ಬೀದಿಕಾಳಗಕ್ಕೆ ಜನರನ್ನು ಸಜ್ಜುಗೊಳಿಸಿದರು. ಅವರ ಉದ್ರಿಕ್ತ ಪರಿಣಾಮಕಾರಿ ಭಾಷಣಗಳು, ಧಾರ್ಮಿಕ ವಿರೋಧಿ ಘೋಷಣೆಗಳು ದಲಿತ ಮರುಚಳುವಳಿಗೆ ಪ್ರೇರೇಪಿಸಿತು. ದಲಿತ ಪ್ಯಾಂಥರ್ಸ್‌ನ ಈ ಕ್ರಮವನ್ನು ವಿರೋಧಿಸಲು ಆಗಸ್ಟ್ 3 ರಂದು ಪುಣೆ ಬಂದ್ ಆಚರಣೆಗೆ ವಿದ್ಯಾರ್ಥಿ ಚಳುವಳಿಗಾರರು ಕರೆನೀಡಿದರು.

(ಕೊನೆಯ ಪುಟ ನೋಡಿ)

### ರಾಜ್ಯಾಂಗ ಸುಡಬೇಕು

ನನ್ನನ್ನು ರಾಜ್ಯಾಂಗದ ನಿರ್ಮಾಪಕನೆಂ–ದು ಹೇಳುತ್ತಾರೆ. ಆದರೆ ನಾನೇ ಆ ರಾಜ್ಯಾಂಗವನ್ನು ಸುಟ್ಟುಹಾಕಲು ಎಲ್ಲರಿಗಿಂತಲೂ ಮುಂದೆ ನಿಂತಿದ್ದೇನೆ. ನನಗೆ ರಾಜ್ಯಾಂಗ ಬೇಕಾಗಿಲ್ಲ.

ನಾನು ಅವರ ಅಡಿಯಾಳಾಗಿದ್ದು ಬಹುಸಂಖ್ಯಾತರ ಅಭಿಲಾಷೆಗಳಿಗನುಗುಣವಾಗಿ ಅವರು ಹೇಳಿದಂತೆ ಮಾಡಿದೆ.

**—ಡಾ॥ ಬಿ. ಆರ್. ಅಂಬೇಡ್ಕರ್**

[5-9-1953ರಲ್ಲಿ ರಾಜ್ಯ ಪರಿಷತ್ತಿನಲ್ಲಿ ಮಾತನಾಡುತ್ತ]

# ಮರಾಠವಾಡ ವಿಶ್ವವಿದ್ಯಾಲಯಕ್ಕೆ ಅಂಬೇಡ್ಕರ್ ಹೆಸರಿಡಲು ವಿರೋಧ:

[5ನೇ ಪುಟದಿಂದ]

ಆದರೆ ಪ್ರಬಲರಾದ ಪ್ಯಾಂಥರ್ಸ್ ಮುಚ್ಚಿದ ಅಂಗಡಿಗಳನ್ನು ತೆರೆಸಿದರು.

### ಬೆಂಕಿಗೆ ಆಹುತಿ

ಆಗಸ್ಟ್ 4 ರಂದು ನಂದೇರ್ ಜಿಲ್ಲೆಯ ಸುಗಾಂಗ್ ಗ್ರಾಮದ ದಲಿತರ ಕೇರಿಗೆ ಚಳುವಳಿಗಾರರು ಧಾಳಿ ನಡೆಸಿ ಸುಮಾರು 50 ಕ್ಕೂ ಹೆಚ್ಚು ಗುಡಿಸಲುಗಳಿಗೆ ಬೆಂಕಿ ಇಟ್ಟಾಗ ಒಬ್ಬ ದಲಿತ ಬೆಂಕಿಗೆ ಆಹುತಿಯಾದ. ಮತ್ತೆ ಅವರು ಅನೇಕ ಮಹಿಳೆಯರ ಮೇಲೆ ಅತ್ಯಾಚಾರದಲ್ಲಿ ತೊಡಗಿದರು.

ಈ ಮಧ್ಯೆ 9 ಮಂದಿ ಕ್ರಾಂತಿಕಾರಿ ದಲಿತ ಬರಹಗಾರರು ಮತ್ತು ಪ್ಯಾಂಥರ್ಸ್‌ನ ಕಾರ್ಯದರ್ಶಿ ಗಂಗಾಧರ್ ಗಾಢೆ ಅವರು ಎಲ್ಲ ಕಡೆಯ ದಲಿತರು, ಸಂಕಷ್ಟಕ್ಕೀಡಾಗುವ ಬಾಂಧವರನ್ನು ರಕ್ಷಿಸಲು ಮರಾಠವಾಡದತ್ತ ಬರಬೇಕೆಂದು ಮನವಿ ಮಾಡಿ ಪ್ರತಿಚಳುವಳಿಯನ್ನು ಚುರುಕುಗೊಳಿಸಲು ರಾತ್ರೋ ರಾತ್ರಿ ಊರೂರು ಸುತ್ತ ತೊಡಗಿದರು.

### ಅತ್ಯಾಚಾರ

ದಲಿತ ವಿರೋಧಿ ಚಳುವಳಿಯು ಎಲ್ಲಡೆಯು ವ್ಯಾಪಿಸಿದಂತೆ ವಿಶ್ವವಿದ್ಯಾನಿಲಯಕ್ಕೆ ಅಂಬೇಡ್ಕರ್ ಹೆಸರು ಬಂದದ್ದೇ ಆದರೆ ಪದವಿ ಪತ್ರಗಳಲ್ಲಿ ಅವರ ಭಾವಚಿತ್ರವಿರುತ್ತದೆಂದು ಗುಲ್ಲು ಹಬ್ಬಿಸಿದರು. ಅನೇಕ ಕಡೆ ಅಂಬೇಡ್ಕರ್ ಪ್ರತಿಮೆಗಳನ್ನು ನಾಶಗೊಳಿಸಿದರು. ಈ ವಿನಾಶಕಾರಿ ಕೃತ್ಯಗಳಲ್ಲಿ ತೊಡಗಿದ್ದಂತ ಈ ಚಳುವಳಿಗಾರರು ಔರಂಗಾಬಾದ್ ತಾಲ್ಲೂಕಿನ ಚೌಕ ಎಂಬಲ್ಲಿ ಹಾಡುಹಗಲಲ್ಲೇ ನವಬೌದ್ಧ ಯುವತಿಯೋರ್ವಳ ಮೇಲೆ ಅತ್ಯಾಚಾರವೆಸಗಿದರು. ಮಿಲಿಂದಿ ಆರ್ಟ್ಸ್ ಕಾಲೇಜಿನ ಹರಿಜನ ಶಿಕ್ಷಕರೊಬ್ಬರ ಮನೆಗೆ ನುಗ್ಗಿ ಅವರನ್ನು ಥಳಿಸಿದರು.

### ಗುಂಡಿಗೆ ನಾಲ್ವರು ಬಲಿ

ಈ ಚಳುವಳಿಗೆ ತೀವ್ರ ಪೆಟ್ಟು ಕೊಡಬೇಕೆಂದು ರಿಪಬ್ಲಿಕನ್ ಪಕ್ಷ ಮತ್ತು ಪ್ಯಾಂಥರ್ಸ್ ಜೊತೆಗೂಡಿ ಆಗಸ್ಟ್ 6ರಂದು ನಾಗಪುರ-ಇಂದೂರ್‌ಗಳಲ್ಲಿ ಭಾರೀ ಪ್ರತಿಭಟನಾ ಪ್ರದರ್ಶನವನ್ನು ನಡೆಸಿದರು. ದಲಿತರ ಆಕ್ರೋಶದ ಮೆರವಣಿಗೆ ಮೇಲೆ ಪೋಲೀಸರು ಗೋಲಿಬಾರ್ ನಡೆಸಿದರು. ಪೋಲಿಸರ ಗುಂಡಿಗೆ ನಾಲ್ವರು ಸತ್ತರಲ್ಲದೆ 24 ಮಂದಿ ಗಾಯಗೊಂಡರು.

ಇತ್ತೀಚೆಗೆ ಅಸಂಘಟಿತರಾಗಿದ್ದ ಪ್ಯಾಂಥರ್ಸ್ ಚಳುವಳಿಯನ್ನು ತೀವ್ರವಾಗಿ ಎದುರಿಸಲು ಸಜ್ಜುಗೊಳ್ಳುವಂತೆ ಒಂದು ವೇದಿಕೆಯತ್ತ ಸೇರಿ ಪ್ರತ್ಯೇಕ ದಲಿತ ಸ್ಥಾನಕ್ಕೆ ಒತ್ತಾಯಿಸಿದರು.

### ಮಹಿಳೆಯರ ಪ್ರದರ್ಶನ

ಪುಣೆಯ ರಿಪಬ್ಲಿಕನ್ ಪಕ್ಷ ಮತ್ತು ದಲಿತ ಪ್ಯಾಂಥರ್ಸ್‌ಗೆ ಸೇರಿದ ಸುಮಾರು ಒಂದು ಸಾವಿರಕ್ಕೂ ಹೆಚ್ಚು ಮಹಿಳೆಯರು ಆಗಸ್ಟ್ 6ರಂದು ತಮ್ಮ ಸಹೋದರಿಯರ ಮೇಲಿನ ಅತ್ಯಾಚಾರವನ್ನು ಖಂಡಿಸಿ ನಿಷೇದಾಜ್ಞೆಯನ್ನು ಉಲ್ಲಂಗಿಸಿ ಪ್ರದರ್ಶನ ನಡೆಸಿದರು. ನಿಷೇದಾಜ್ಞೆ ಉಲ್ಲಂಗಿಸಿದ್ದಕ್ಕಾಗಿ ತಮ್ಮನ್ನು ಬಂಧಿಸಲು ತೊಡಗಿದಾಗ ಪೋಲೀಸ್ ವ್ಯಾನ್‌ಗಳಿಗೆ ಕಲ್ಲು ತೂರಿದರು. ಕೊನೆಗೂ ಸುಮಾರು 900ಮಂದಿಯನ್ನು ಪೋಲೀಸರು ಬಂಧಿಸಿದರು.

ಬಂಧನಕ್ಕೆ ತಾವು ಸಿದ್ಧರಿದ್ದೇವೆಂದು ದಲಿತ ಪ್ಯಾಂಥರ್ಸ್ ಮತ್ತು ರಿಪಬ್ಲಿಕನ್ ಪಕ್ಷದವರ ಮತ್ತೊಂದು ಗುಂಪು ಇತ್ತ ಮೌನ ಮೆರವಣಿಗೆ ನಡೆಸಿದರು.

### ಗುಡಿಸಲಿಗೆ ಬೆಂಕಿ

ಈ ನಡುವೆ ದಲಿತ ಪ್ಯಾಂಥರ್ಸ್. ಪ್ರತಿಭಟನೆಯೂ ತೀವ್ರವಾಗತೊಡಗಿದಾದ ದನೆಗಾನ್ ಗ್ರಾಮಕ್ಕೆ ವಿದ್ಯಾರ್ಥಿ ಚಳವಳಿಗಾರರು ರಾತ್ರೋ ರಾತ್ರಿ ಮುತ್ತಿಗೆ ಹಾಕಿ ಹರಿಜನರ ಗುಡಿಸಲುಗಳಿಗೆ ಬೆಂಕಿ ಹಚ್ಚಿದರು.

ಮಧ್ಯರಾತ್ರಿ ಸಮಯದಲ್ಲಿ ಗುಂಪೊಂದು ತಮ್ಮ ಕೇರಿಯತ್ತ ಎಲ್ಲಾ ಮೂಲೆಗಳಿಂದ ಧಾಳಿ ನಡೆಸಿ, ಗುಡಿಸಲುಗಳ ಬಾಗಿಲುಗಳಿಗೆ ಅಲ್ಯೂಮಿನಿಯಂ ತಂತಿಗಳನ್ನು ಬಿಗಿದು ಕಟ್ಟಿ ಸೀಮೆ ಎಣ್ಣೆ ಎರಚಿ ಬೆಂಕಿ ಇಟ್ಟರು. ಸುಮಾರು 4 ಗಂಟೆ ಹೊತ್ತಿಗೆ ಎಲ್ಲರ ಗುಡಿಸಲುಗಳು ಭಸ್ಮವಾದವು. ಎಲ್ಲರೂ ತಮ್ಮ ಜೀವ ರಕ್ಷಣೆಯಲ್ಲಿ ಕಾತರಾಗಿದ್ದರಿಂದ ಗುಡಿಸಲುಗಳನ್ನು ಉಳಿಸಿಕೊಳ್ಳಲಾಗಲಿಲ್ಲ. ಬೆಳಿಗ್ಗೆ 10-30ರವರೆಗೆ ಪೋಲೀಸರಾಗಲಿ, ಸುದ್ದಿಗಾರರಾಗಲಿ ಇತ್ತ ಬರಲಿಲ್ಲವೆಂದು ನೊಂದ ವ್ಯಕ್ತಿಯೊಬ್ಬ ತಡವಾಗಿ ಹೋದ ಪತ್ರಕರ್ತನೊಬ್ಬನಿಗೆ ಕಣ್ಣೀರು ಹಾಕುತ್ತ ಹೇಳಿದ.

ಚಳವಳಿಗಾರರು ನಂದೇಕ್ ನಗರದಲ್ಲಿ ಹರಿಜನರಿಗೆ ಅಂಗಡಿಗಳಲ್ಲಿ ದಿನನಿತ್ಯ ಬಳಕೆ ಸಾಮಾನುಗಳು ದೊರೆಯದಂತೆ ಅಡ್ಡಿ ಉಂಟು ಮಾಡ ತೊಡಗಿದರು. ಕೆಲವು ಕಡೆ ಹರಿಜನರು ತಮ್ಮ ಸಹೋದರಿಯರ ಮಾನಭಂಗ ನಡೆದ ಬಗ್ಗೆ ಪ್ರತಿಭಟನೆ ಮುಂದುವರಿಸಿದ್ದರು.

ಮುಂಬೈನಲ್ಲಿ ದಲಿತ ಪ್ಯಾಂಥರ್ಸ್ ಪ್ರತಿಭಟನೆಗಳು ಎಡೆಬಿಡದೆ ಮುಂದುವರಿದಿತ್ತು. ಇಲ್ಲಿನ ಜೆಂಬೂರಿನಲ್ಲಿ ಸುಮಾರು 200 ಮಂದಿ ಕಾರ್ಮಿಕರು ಪ್ರದರ್ಶನ ನಡೆಸಿ ಬಂದ್ ಆಚರಿಸಿದರು. ಈ ಎಲ್ಲ ಘಟನೆಗಳು ನಡೆದದ್ದು ಒಂದೇ ದಿನದಲ್ಲಿ.

### ಸೆರೆ

ಪುನರ್ ನಾಮಕರಣ ನಿರ್ಧಾರಕ್ಕೆ ಬೆಂಬಲಿಸಿ ಮಂತ್ರಿಗಳಿಗೆ ಮನವಿಸಲ್ಲಿಸಲು ವಿದರ್ಭ ಘಟಕ ದಲಿತ ಪ್ಯಾಂಥರ್ಸ್‌ನ 115 ಮಂದಿಯು ಕಪ್ಪು ಬ್ಯಾಡ್ಜ್ ಧರಿಸಿ ರೈಲ್ವೆ ನಿಲ್ದಾಣದಲ್ಲಿ ಸೇರಿದಾಗ ಪೋಲೀಸರಿಗೆ ಸೆರೆಯಾದರು.

[ಆಧಾರ: ಟೈಮ್ಸ್ ಆಫ್ ಇಂಡಿಯಾ]

## ದಲಿತರ ಸಂಘಟಿತ ಹೋರಾಟ

[ಮೊದಲನೆ ಪುಟದಿಂದ]

ಗಳ ಕಚೇರಿ ಮುಂದೆ ಧರಣಿ ಕೂಡುವುದರ ಮೂಲಕ ಪ್ರಾರಂಭವಾದ ಹೋರಾಟ, ಧರಣಿಯಿಂದ ಏಳಿಸುವ ರಾಜಕಾರಣಿಗಳ ಪೊಳ್ಳು ಆಶ್ವಾಸನೆಗಳಿಗೆ ಸೊಪ್ಪು ಹಾಕಲಿಲ್ಲ. ಅಲ್ಲದೆ 24ರಿಂದ ಧರಣಿಯನ್ನು ಅನ್ನಸತ್ಯಾಗ್ರಹಕ್ಕೆ ತಿರುಗಿಸಿ ಹೋರಾಟವನ್ನು ಇನ್ನಷ್ಟು ಗಟ್ಟಿಗೊಳಿಸಲಾಯಿತು,

ಹೋರಾಟದ ಬಿಸಿ ತಟ್ಟಿದಾಗ ಸರ್ಕಾರ ಎಚ್ಚರಗೊಂಡು ವಿದ್ಯಾರ್ಥಿಗಳಿಗೆ ತಾತ್ಕಾಲಿಕ ಬಾಡಿಗೆ ಕಟ್ಟಡವೊಂದನ್ನು ನೀಡಿತಲ್ಲದೆ, ಕರಡಗೂರಿನ ದಲಿತರಿಗೆ ಗೋಮಾಳ ಹಂಚಲು ಮುಂದಾಯಿತು. ಹೋರಾಟದಿಂದ ಜಯಗಳಿಸಿದ ನಂತರ 31ರಂದು ಸತ್ಯಾಗ್ರಹ ನಿಲ್ಲಿಸಲಾಯಿತು.

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ನೂತನ್ ಪ್ರಿಂಟಿಂಗ್ ಪ್ರೆಸ್, ಬೆಂಗಳೂರು-3 ಇಲ್ಲಿ ಮುದ್ರಿಸಲ್ಪಟ್ಟು ಗೋವಿಂದಯ್ಯ ಅವರಿಂದ ಪ್ರಕಟಿಸಲ್ಪಟ್ಟಿತು.
ವಿಳಾಸ: 5-ಎ, ಪಾಣಿ ವಾಣಿಜ್ಯಶಾಲಾ, ಪತ್ರಕರ್ತರ ಕಾಲೋನಿ, ಬೆಂಗಳೂರು-560 002